ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ಸ್ಥಳೀಯ ಸಂಸ್ಥೆಗಳಿಗೆ ಬೇರೆ ಇಲಾಖೆಯಿಂದ ನಿಯೋಜನೆ ಬಂದಿರುವ ನೌಕರರ ಕುರಿತು

ಶ್ರೀ ಕಾಂತರಾಜ್(ಬಿ.ಎಂ.ಎಲ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1530 (1795) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿರುವ ಪೌರಾಡಳಿತ ಇಲಾಖೆಯ ಅಡಿಯಲ್ಲಿ ಬರುವ ಸ್ಥಳೀಯ ಸಂಸ್ಥೆಗಳಿಗೆ ಬೇರೆ ಇಲಾಖೆಗಳಿಂದ "ಸಿ" ದರ್ಜೆಯ ನೌಕರರು ನಿಯೋಜನೆ ಮೇರೆಗೆ ಬಂದು ಆ ಸಂಸ್ಥೆಗಳ ಮುಖ್ಯಾಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಬಂದಿದ್ದಲ್ಲಿ, ಅಂತಹ ನೌಕರರುಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ಈ ನಿಯೋಜನೆ ಎಷ್ಟು ವರ್ಷಗಳ ಅವಧಿಗೆಂದು ಷರತ್ತು ವಿಧಿಸಲಾಗಿದೆ;

(ಇ) ಈ ಸಂಸ್ಥೆಗಳಲ್ಲಿ ಸುಮಾರು 10 ರಿಂದ 15 ಕೋಟಿ ರೂಪಾಯಿಗಳ ಅನುದಾನವನ್ನು ವ್ಯಯಿಸುವ ಅಧಿಕಾರವಿರುವುದರಿಂದ ಕನಿಷ್ಟ ಪಕ್ಷ ಆ ಸಂಸ್ಥೆಗಳಿಗೆ ದ್ವಿತೀಯ ದರ್ಜೆ ಗುಮಾಸ್ತ, ಆರೋಗ್ಯ ನಿರೀಕ್ಷಕ, ರೇಕಾರ್ಡ್ ಕೀಪರ್ ಇನ್ನು ಮುಂತಾದ ಇದೇ ದರ್ಜೆಯ ನೌಕರರನ್ನು ಮುಖ್ಯಾಧಿಕಾರಿಯಾಗಿ ನೇಮಕ ಮಾಡುವುದು ಸರಿಯಾದ ಕ್ರಮವೇ;

(ಈ) ಹಾಗಿದ್ದಲ್ಲಿ, ಈ ಸಂಸ್ಥೆಗಳ ಮುಖ್ಯಾಧಿಕಾರಿಗಳ ಹುದ್ದೆಗೆ ಇಲಾಖೆಯಲ್ಲಿರುವ ಸಹಾಯಕ ನಿರ್ದೇಶಕರು, ಉಪ ತಹಶೀಲ್ದಾರ್, ಅಥವಾ ಇದೇ ವೃಂದದ ಬೇರೆ ಇಲಾಖೆಯವರನ್ನು ನೇಮಕ ಮಾಡಲು ಸರ್ಕಾರ ಕೂಡಲೇ ಕ್ರಮ ತೆಗೆದುಕೊಳ್ಳುವುದೇ?